ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 1, March-April 2024, Pp. 60-72
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಹುಲಿಬೇಟೆ ವೀರಗಲ್ಲುಗಳ ವಿಶ್ಲೇಷಣೆ: ಚಿಕ್ಕಮಗಳೂರು ಪರಿಸರದ ಸ್ಮಾರಕಗಳನ್ನು ಅನುಲಕ್ಷಿಸಿ

**ಮಂಜುನಾಥ ಟಿ.[1] ಮತ್ತು ಪ್ರೊ. ಸರ್ವಮಂಗಳ ಜಿ.[2]**
[1]ಸಂಶೋಧನಾ ವಿದ್ಯಾರ್ಥಿ, [2]ಮುಖ್ಯಸ್ಥರು
ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾಲಯ, ಜ್ಞಾನ ಸಹ್ಯಾದ್ರಿ, ಶಂಕರಘಟ್ಟ.

**Abstract:**
*ಹೋರಾಟದಲ್ಲಿ ಮಡಿದ ವ್ಯಕ್ತಿಗೆ ಸ್ಮಾರಕಗಳನ್ನು ಹಾಕಲಾಗುತ್ತಿತ್ತು. ಹೋರಾಟವೆಂದರೆ ಸಣ್ಣ ಜಗಳಗಳಿಂದ, ಆಕ್ರಮಣ, ದರೋಡೆ, ಯುದ್ಧಗಳನ್ನೆಲ್ಲಾ ಒಳಗೊಂಡಿತ್ತು. ಇಲ್ಲಿ ಮಡಿದ ವ್ಯಕ್ತಿ ವೀರ ಎಂಬ ಭಾವನೆಯಿಂದ ಅವನ ನೆನಪಿಗೆ ವೀರಗಲ್ಲುಗಳನ್ನು ನೆಡಲಾಗುತ್ತಿತ್ತು. ಯುದ್ಧದಲ್ಲಿ ಪಾಲ್ಗೊಂಡವರಷ್ಟೇ ವೀರರಲ್ಲ, ಕ್ರೂರ ಪ್ರಾಣಿಗಳೊಂದಿಗೆ ಹೋರಾಡಿ ಮಡಿದವರೂ ಸಹ ವೀರರೇ ಆಗಿದ್ದಾರೆ. ಕೆಲವು ಪ್ರಾಣಿಗಳು ಊರಿಗೆ ನುಗ್ಗಿ ಜನಗಳಿಗೆ, ತಾವು ಸಾಕಿದ ಜಾನುವಾರುಗಳಿಗೆ ತೊಂದರೆ ಕೊಡುವುದಲ್ಲದೆ, ಕಷ್ಟದಿಂದ ಬೆಳೆದ ಬೆಳೆಗಳನ್ನು ನಾಶಪಡಿಸುತ್ತವೆ. ಇಂತಹ ಪ್ರಾಣಿಗಳ ಕಾಟವನ್ನು ತಡೆಯಲಾರದೆ ಅವನ್ನು ಬೇಟೆಯಾಡಿ ಕೊಂದುಹಾಕಿದ ಅಥವಾ ಕೊಲ್ಲಲು ಹೋಗಿ ತಾವೇ ಮರಣವನ್ನಪ್ಪಿದ ಘಟನೆಗಳನ್ನು ತಿಳಿಸುವ ಶಾಸನಗಳು ನಮ್ಮಲ್ಲಿ ದೊರೆಯುತ್ತವೆ. ಈ ರೀತಿ ಮರಣವನ್ನು ಹೊಂದಿದವರೂ ಕೂಡ ವೀರರು ಎಂದು ನಮ್ಮ ಜನ ನಂಬಿದ್ದರು. ಹೀಗಾಗಿ ಇವರಿಗೂ ವೀರಗಲ್ಲುಗಳನ್ನು ನೆಡುವ ರೂಢಿ ಬೆಳೆದು ಬಂದಿತು. ವೀರಗಲ್ಲು ಪ್ರಬೇಧಗಳಲ್ಲಿ ಪ್ರಾಣಿ ಬೇಟೆ ವೀರಗಲ್ಲುಗಳು ಸಹ ಒಂದಾಗಿದ್ದು, ಪ್ರಾಣಿಗಳನ್ನು ಬೇಟೆಯಾಡುವ ಸಂದರ್ಭದಲ್ಲಿ ಮಡಿದವರಿಗೆ ವೀರಗಲ್ಲುಗಳನ್ನು ಹಾಕಲಾಗುತ್ತಿತ್ತು. ಪ್ರಸ್ತುತದವರೆಗೆ ಹಂದಿ, ಕರಡಿ, ಚಿರತೆ, ಜಿಂಕೆ, ಹುಲಿ, ಹಾವು, ಮೊಸಳೆ ಆನೆಗಳನ್ನು ಬೇಟೆಯಾಡಲು ಹೋಗಿ ಮಡಿದ ವೀರರ ಸ್ಮಾರಕಗಳು ದೊರಕಿವೆ. ಪ್ರಸ್ತುತ ಲೇಖನದಲ್ಲಿ ಚಿಕ್ಕಮಗಳೂರು ಪ್ರದೇಶದಲ್ಲಿ ದೊರೆತಿರುವ ಹುಲಿಬೇಟೆ ವೀರಗಲ್ಲುಗಳ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ.*

**Keywords:** *ವೀರಗಲ್ಲುಗಳು, ಹುಲಿಬೇಟೆ ವೀರಗಲ್ಲುಗಳು, ಸ್ಮಾರಕಗಳು, ಚಿಕ್ಕಮಗಳೂರು.*

## ಪೀಠಿಕೆ

ಪ್ರಾಗೈತಿಹಾಸಿಕ ಕಾಲದಲ್ಲಿ ಅಲೆಮಾರಿಯಾಗಿದ್ದ ಮಾನವನಿಗೆ ಬೇಟೆ ಆಹಾರ ಒದಗಿಸುವ ವಿಧಾನವಾಗಿತ್ತು. ನಂತರ ಒಂದೆಡೆ ನೆಲೆನಿಂತ ಮಾನವನಿಗೆ ಆಹಾರ ಮತ್ತು ರಕ್ಷಣೆಗಾಗಿ ಬೇಟೆಯನ್ನು ಅವಲಂಬಿಸಿದ್ದನು. ಮಾನವನ ಜೀವನ ಕ್ರಮದಲ್ಲಿ ಬೇಟೆ ಅನಿವಾರ್ಯವಾಗಿತ್ತು. ರಮೇಶ್ ಸ. ಚಿ. (2003). ಅವರು ಐದು ರೀತಿಯ ಬೇಟೆಯ ಉದ್ದೇಶಗಳನ್ನು ಗುರುತಿಸಿದ್ದಾರೆ. ಅವುಗಳೆಂದರೆ (1) ಆಹಾರೋತ್ಪಾದನೆ, (2) ರಕ್ಷಣೆ, (3) ಪ್ರಾಣಿಗಳ ಚರ್ಮ, ಉಗುರು, ಮೂಳೆ, ಹಲ್ಲುಗಳ ಸಂಗ್ರಹಣೆ, (4) ಬಲಪ್ರದರ್ಶನ, ಪ್ರತಿಷ್ಠೆ, ಕೀರ್ತಿ ಮೆರೆಯಲು, ಮತ್ತು (5) ಆಚರಣೆ, ಉತ್ಸವ, ಹಬ್ಬಗಳ ಸಂದರ್ಭ[1]

[1] ರಮೇಶ್, ಸ.ಚಿ. (2003). *ಶಿಕಾರಿ ಪರಂಪರೆ.* ಪು–11

**Please cite this article as:** ಮಂಜುನಾಥ ಟಿ ಮತ್ತು ಪ್ರೊ. ಸರ್ವಮಂಗಳ ಜಿ. (2024). ಹುಲಿಬೇಟೆ ವೀರಗಲ್ಲುಗಳ ವಿಶ್ಲೇಷಣೆ: ಚಿಕ್ಕಮಗಳೂರು ಪರಿಸರದ ಸ್ಮಾರಕಗಳನ್ನು ಅನುಲಕ್ಷಿಸಿ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(1), 60–72.

ನಂತರದ ದಿನಗಳಲ್ಲಿ ನಾಗರಿಕತೆ ಬೆಳೆದಂತೆ ಬೇಟೆಯ ಸ್ವರೂಪ ಮತ್ತು ಉದ್ದೇಶ ಬದಲಾಗಿದೆ. ಬೇಟೆ ಅಮಾನೀಯವಾದದ್ದು, ಇದರಿಂದಾಗಿ ಅನೇಕ ಪ್ರಾಣಿಗಳು ಅವಸಾನದ ಅಂಚಿಗೆ ಬಂದಿವೆ. ಇಂದು ಕಾಡು ಪ್ರಾಣಿಗಳು ಮತ್ತು ಮನುಷ್ಯರ ನಡುವಿನ ಸಂಘರ್ಷವು ಹೆಚ್ಚಾಗಿದೆ. ಮನುಷ್ಯನು ತನ್ನ ಎಲ್ಲೆಯನ್ನು ಮೀರಿ ಪ್ರಾಣಿಗಳ ಸ್ಥಳವನ್ನು ಅತಿಕ್ರಮಿಸಿದಾಗ ಅವು ಸಂಘರ್ಷಕ್ಕೆ ಇಳಿಯುತ್ತವೆ. ಮನುಷ್ಯನ ಸಂಖ್ಯೆ ಹೆಚ್ಚಾದಂತೆ ಮತ್ತು ಜೀವವೈವಿಧ್ಯವು ಹೆಚ್ಚಾದಂತೆ ಮನುಷ್ಯ ಮತ್ತು ಕಾಡು ಪ್ರಾಣಿಗಳ ನಡುವಿನ ಸಂಘರ್ಷ ಹೆಚ್ಚಾಗುತ್ತದೆ. ಇದು ಹೆಚ್ಚಾಗಿ ಕಾಡಂಚಿನ ಪ್ರದೇಶಗಳಲ್ಲಿ ನಡೆಯುತ್ತದೆ. ಆದ್ದರಿಂದಲೇ ಬೇಟೆ ಸಂಸ್ಕೃತಿಯು ಕಾಡಂಚಿನ ಪ್ರದೇಶದಲ್ಲಿ ವಾಸಿಸುವ ಬುಡಕಟ್ಟು ಜನಾಂಗಗಳಲ್ಲಿ ಇನ್ನೂ ಉಳಿದುಕೊಂಡು ಬಂದಿದೆ. ಬೇಟೆಯ ಕ್ರೌರ್ಯ ಹೀಗೆ ಮುಂದುವರೆದಲ್ಲಿ ಜೀವ ಪರಿಸರ ವ್ಯವಸ್ಥೆ ಅಸ್ತವ್ಯಸ್ತಗೊಳ್ಳಲಿದೆ.

ಪ್ರಾಚೀನ ಕಾಲದ ಜನರು ಮೂಲತಃ ಆಹಾರ ಸಂಗ್ರಹಕಾರರು. ಆಹಾರಕ್ಕಾಗಿ ಬೇಟೆ ಸಂಸ್ಕೃತಿ ಪ್ರಾರಂಭವಾಯಿತು. ನಂತರದಲ್ಲಿ ಪಶುಪಾಲನೆ ಮತ್ತು ಕೃಷಿಯಲ್ಲಿ ತೊಡಗಿಸಿಕೊಂಡ. ಈ ಸಂದರ್ಭದಲ್ಲಿ ಪ್ರಾಣಿಗಳ ದಾಳಿ ಸಾಮಾನ್ಯವಾಗಿತ್ತು. ಪ್ರಾಣಿಗಳ ಉಪಟಳ ಹೆಚ್ಚಾದಾಗ ಅವರು ತಮ್ಮ ಆಳುತ್ತಿದ್ದ ವರ್ಗದವರಿಗೆ ಅಹವಾಲು ಹೇಳಿಕೊಳ್ಳುತ್ತಿದ್ದರು. ರಾಜರುಗಳು ಸ್ವತಃ ಬೇಟೆಯಾಡಿ ಅವುಗಳ ಉಪಟಳವನ್ನು ನಿವಾರಿಸುತ್ತಿದ್ದರು. ಬೇಟೆಯೆನ್ನುವುದು ರಾಜ ಮಹಾರಾಜರಿಗೆ ಪ್ರತಿಷ್ಠೆ ಹಾಗೂ ಬಲ ಪ್ರದರ್ಶನದ ವೇದಿಕೆಯಾಗಿತ್ತು. ಕೆಲವು ಸಂದರ್ಭದಲ್ಲಿ ಊರಿನವರೇ ಅವುಗಳನ್ನು ಹತ್ತಿಕ್ಕುತ್ತಿದ್ದರು. ಬೇಟೆ ಜನಸಾಮಾನ್ಯರಿಗೆ ಆಹಾರೋತ್ಪಾದನೆ ಅಂಗವಾದರೆ, ಉಳ್ಳವರಿಗೆ ಅದು ಮನೋರಂಜನೆಯ ಸಾಧನವಾಗಿತ್ತು.[2]

ಪ್ರಸ್ತುತ ನಮ್ಮ ಅಧ್ಯಯನ ವ್ಯಾಪ್ತಿಯ ಪ್ರದೇಶವಾದ ಚಿಕ್ಕಮಗಳೂರು ಪರಿಸರದಲ್ಲಿ ಕಂಡುಬರುವ ಹುಲಿಬೇಟೆ ವೀರಗಲ್ಲುಗಳ ಬಗ್ಗೆ ವಿಶ್ಲೇಷಣಾತ್ಮಕ ಅಧ್ಯಯನವನ್ನು ಈ ಲೇಖನದಲ್ಲಿ ಕೈಗೊಳ್ಳಲಾಗಿದೆ. ಹುಲಿ ಮಾಂಸಹಾರಿ ಭಕ್ಷಕ ಜೀವಿಯಾಗಿದ್ದು, ಭಾರತದಲ್ಲಿ ಇವುಗಳ ಸಂಖ್ಯೆ ಹೆಚ್ಚಾಗಿದೆ. 17ನೇ ಶತಮಾನದಲ್ಲಿ ಭಾರತಕ್ಕೆ ಬಂದಿದ್ದ ಫ್ರಾನ್ಸುವಾ ಪಿರಾರ್ಡ್ ದೆ ಲವಲ್ ಎಂಬ ಪ್ರವಾಸಿಯು ಈ ದೇಶದಲಿ ಹುಲಿಗಳು ಹೆಚ್ಚು ಇವನ್ನು ನಾಯರ್‌ಗಳು ಬೇಟೆಯಾಡುತ್ತಾರೆ. ಯಾವ ಆಯುಧಗಳು ಇಲ್ಲದೆ ನಾಯರ್‌ಗಳು ಹುಲಿಗಳ ಮೇಲೆ ಬಿದ್ದು ಅವನ್ನು ಕೊಂದದ್ದನ್ನು ನಾನು ನೋಡಿದ್ದೇನೆ. ಕೆಲವರು ಮೈಕೈ ಪರಚಿಸಿಕೊಂಡು ರಕ್ತ ಸುರಿಸುತ್ತಾ ಕೊಂದ ಹುಲಿಯನ್ನು ರಾಜನ ಮುಂದಕ್ಕೆ ಎಳೆದುಕೊಂಡು ಬಂದದ್ದನ್ನು ನೋಡಿದ್ದೇನೆ ಎಂದು ತಮ್ಮ ಅನುಭವಗಳನ್ನು ಹೇಳಿಕೊಂಡಿದ್ದಾರೆ.[3] ಕರ್ನಾಟಕದಲ್ಲಿ ಹುಲಿ ಮತ್ತು ಮಾನವನ ನಡುವಿನ ಸಂಘರ್ಷವು ಹೆಚ್ಚಾಗಿ ಪಶ್ಚಿಮಘಟ್ಟ ಸಾಲಿನಲ್ಲಿ ಕಂಡುಬರುತ್ತದೆ. ಹುಲಿಗಳು ರೈತರು ಸಾಕಿರುವ ಜಾನುವಾರುಗಳನ್ನು ತಿನ್ನುತ್ತಿದ್ದವು, ಕೆಲವು ಸಂದರ್ಭಗಳಲ್ಲಿ ನರಭಕ್ಷಕಗಳಾಗಿ ಬದಲಾಗಿವೆ. ಇಂತಹ ಮೃಗಗಳ ಅಪಾಯದಿಂದ ಕಾಪಾಡಲು ಜನರು ಸಹಾಯ ಹಸ್ತವನ್ನು ಎದುರು ನೋಡುತ್ತಿದ್ದರು. ಹುಲಿಬೇಟೆಯಾಡಲು ಕೌಶಲ್ಯ ಬೇಕು, ಇಲ್ಲದಿದ್ದಲ್ಲಿ ಹುಲಿಯೇ ಅವನನ್ನು ಬೇಟೆಯಾಡುತ್ತದೆ. ಹುಲಿಬೇಟೆ ಇತಿಹಾಸ ಕಾಲದಿಂದಲೂ ನಡೆದುಕೊಂಡು ಬಂದಿದೆ. ವಾಸಂತಿಕದೇವಿಯನ್ನು ಪೂಜಿಸಲು ಸೊಸವೂರು ಅಥವಾ ಶಶಕಪುರಕ್ಕೆ ಹೋಗಿದ್ದ ಸಳನು ಆಶ್ರಮಕ್ಕೆ ನುಗ್ಗಿದ ಹುಲಿಯನ್ನು ತನ್ನ ಗುರುಗಳಾದ ವರ್ಧಮಾನ ಸುದತ್ತರ ಆದೇಶದಂತೆ ಇರಿದು

[2] ರಮೇಶ್, ಸ.ಚಿ. (2003). ಪುರ್ವೋಕ್ತ. ಪು.11

[3] ನಾಗೇಗೌಡ ಹೆಚ್. ಎಲ್. (2021). *ಪ್ರವಾಸಿ ಕಂಡಇಂಡಿಯಾ.* ಸಂ–3, ಪು. 388

ಕೊಂದದ್ದು,[4] ಮಹಾನವಮಿ ದಿಬ್ಬ ಹಾಗೂ ವಿಜಯವಿಠಲ ಗುಡಿಯ ಸಭಾಮಂಟಪದ ಹಿಂಭಾಗದಲ್ಲಿರುವ ಹುಲಿಯ ಬೇಟೆಯ ಉಬ್ಬು ಶಿಲ್ಪಗಳು[5] ಹಾಗೂ ಅಜ್ಜಂಪುರ ತಾಲೂಕಿನ ಸೊಲ್ಲಾಪುರ ಗ್ರಾಮದಲ್ಲಿರುವ ಸಾಶ 15–16ನೇ ಶತಮಾನಕ್ಕೆ ಸೇರಿದ ಶ್ರೀ ಸಿದ್ಧರಾಮೇಶ್ವರ ದೇವಾಲಯದ ಒಳ ಆವರಣದ ಗೋಡೆಯಲ್ಲಿರುವ ಹುಲಿಬೇಟೆ ಉಬ್ಬುಶಿಲ್ಪ, ಜೊತೆಗೆ ಜಿಲ್ಲೆಯ ಹುಲಿಬೇಟೆ ವೀರಗಲ್ಲುಗಳು ಇತಿಹಾಸ ಕಾಲದಿಂದಲೂ ಹುಲಿಬೇಟೆ ನಡೆದುಕೊಂಡು ಬಂದಿರುವುದಕ್ಕೆ ಪುರಾವೆಯನ್ನು ಒದಗಿಸುತ್ತವೆ.

ಕೆನೆತ್ ಡಿ ಎಸ್ ಆಂಡರ್ಸನ್‌ರವರು ತಮ್ಮ ಕಾಡಿನ ಅನುಭವಗಳು ಪುಸ್ತಕದಲ್ಲಿ ಚಿಕ್ಕಮಗಳೂರು ಜಿಲ್ಲೆಯಲ್ಲಿ ಉಪಟಳ ನೀಡುತ್ತಿದ್ದ ಹುಲಿಗಳ ಬಗ್ಗೆ ಹೇಳುತ್ತಾ ಲಕ್ಕವಳ್ಳಿ, ಲಿಂಗದಹಳ್ಳಿ, ಸಾಂತವೇರಿ, ಕೆಮ್ಮಣ್ಣುಗುಂಡಿ ಈ ಪ್ರದೇಶದಲ್ಲಿ ಹುಲಿಗಳ ಉಪಟಳ ಹೆಚ್ಚಾಗಿತ್ತು ಎಂದು ಹೇಳುತ್ತಾರೆ. ಸಾಂತವೇರಿಯಲ್ಲಿ ಪೋಸ್ಟ್ ಮಾಸ್ಟರ್ ಆಗಿದ್ದ ಡಿಕ್ ಬರ್ಡ್ ಈ ಭಾಗದಲ್ಲಿ ಜನರಿಗೆ ತೊಂದರೆ ಕೊಡುತ್ತಿದ್ದ ಹುಲಿಗಳನ್ನು ಬೇಟೆಯಾಡಿರುವ ಬಗ್ಗೆ ಹೇಳುತ್ತಾರೆ.[6] ನಮ್ಮ ಅಧ್ಯಯನ ವ್ಯಾಪ್ತಿಯಲ್ಲಿ ಹೆಚ್ಚು ಸಂಖ್ಯೆಯ ಹುಲಿಬೇಟೆ ವೀರಗಲ್ಲುಗಳು ದೊರಕಿದ್ದು, ಕೆನೆತ್‌ರವರು ಪ್ರಸ್ತಾಪಿಸಿರುವ ಲಿಂಗದಹಳ್ಳಿ ಸಾಂತವೇರಿ ಸುತ್ತಲಿನ ಪ್ರದೇಶಗಳಾದ ಚಿಕ್ಕಿಂಗಳ, ಬಳ್ಳಿಗನೂರು, ಲಿಂಗದಹಳ್ಳಿ, ದ್ಯಾಂಪುರ, ಲಕ್ಕವಳ್ಳಿ ಗ್ರಾಮಗಳಲ್ಲಿ ಕಂಡುಬಂದಿವೆ. ಜೊತೆಗೆ ಕಡೂರು ತಾಲೂಕಿನ ಸೋಮನಹಳ್ಳಿ, ಅಣಂಗೆರೆ ಚಿಕ್ಕಮಗಳೂರು ಪರಿಸರದ ಅಂಬಳೆ, ಅರಿಸಿನಗುಪ್ಪೆ, ಕುಮಾರಗಿರಿ, ಗೊಣಕಲ್ಲು, ಹಿರೇಮಗಳೂರು, ತಳಿಹಳ್ಳ ಹಾಗೂ ಕಳಸ ಭಾಗದ ಸಂಸೆ, ಬಸರೀಕಲ್ಲು, ನೆಲ್ಲಿಬೀಡು–ಕೆಳಮನೆ, ಕುದುರೆಮುಖ ಗ್ರಾಮಗಳಲ್ಲಿ ಕಂಡುಬಂದಿವೆ.

ಹುಲಿಗಳು ಗ್ರಾಮದ ಜನರಿಗೆ ಉಪಟಳ ನೀಡುತ್ತಿದ್ದವಾಗಿದ್ದು ಆ ಸಂದರ್ಭದಲ್ಲಿದ್ದ ವೀರರು ಅವುಗಳನ್ನು ಕೊಂದಿರುವುದಲ್ಲದೇ, ಆ ಹೋರಾಟದಲ್ಲಿ ಗಾಯಗೊಂಡು ತಾವು ಮರಣ ಹೊಂದಿದ್ದಾರೆ. ಅತ್ತಿಗನಾಳು ವೂರೊಳು ಬಂದ ಪಂಟ ಹುಲಿಯ ಬುಗೆಯ ಪೂಚನಾಇ ಮಗ ಬಂನಾಯಗ ರಾಮನು ಹುಲಿಯ ಕಾದು ದೇಯ ಬಿಟ್ಟು ಕಲಿಕಾ ಸ್ವರ್ಗಸ್ತನಾದ,[7] ಚೋಲೆಯ ಎನ್ನುವ ವ್ಯಕ್ತಿ ಚೋಳಾಪುರದಲ್ಲಿ ಚೋಳನ ಮುಂದೆ ಹುಲಿಯನಿರಿದು ಸ್ವರ್ಗಸ್ತನಾದನು (ಚಿತ್ರ–ಅಂಬಳೆ).[8] ಹುಲಿಯೇ ಊರೊಳಗೆ ಬಂದಾಗ ಆ ಸಂದರ್ಭದಲ್ಲಿದ್ದ ಸಾಮಾನ್ಯ ಜನರು ಹುಲಿಯ ಜೊತೆ ಹೋರಾಡಿ ಮಡಿದಿದ್ದಾರೆ. ಹುಲಿಯನ್ನು ಕೊಂದು ಪ್ರಾಣಾರ್ಪಣೆ ಮಾಡಿದ ವೀರನ ಹೆಂಡತಿಯರು ಸಹ ಮರಣ ಹೊಂದಿದ ಪ್ರಸಂಗಗಳು ಇವೆ. ಗೊಣಕಲ್ಲು ಸ್ಥಳದಲ್ಲಿರುವ ಸ್ಮಾರಕವು ಕಳನೆಯ ಕಪ್ಪಗಾವುಂಡ ಹುಲಿಯನಿರಿದು ಸತ್ತಯಾತನ ಮದವಳಿಗೆ ಕಾಚವ್ವೆ ತಪರಿಗಿಳದಳು ಇಬ್ಬರು ಸುರಲೋಕ ಪತರಾದ[9] ಬಗ್ಗೆ ತಿಳಿಸುತ್ತದೆ. ಹೀಗೆ ಆಕಸ್ಮಿಕವಾಗಿ ಹುಲಿ ದಾಳಿ ಮಾಡಿದಾಗ ಸ್ಥಳದಲ್ಲಿದ್ದ ಜನರೇ ಅವುಗಳ ವಿರುದ್ಧ ಹೋರಾಡಿ ಗಾಯಗೊಂಡು ತಾವು ಮರಣ ಹೊಂದಿದ್ದಾರೆ. ಇವರು ಯಾವುದೇ ತಯಾರಿ ಮಾಡಿಕೊಳ್ಳಲು ಅವಕಾಶವಿರುತ್ತಿರಲಿಲ್ಲ. ಧೈರ್ಯವೊಂದೇ ಇವರ ಆಯುಧವಾಗಿರುತ್ತಿತ್ತು.

ಗ್ರಾಮದ ಜನರಿಗೆ ತೊಂದರೆ ನೀಡುತ್ತಿದ್ದ ಹುಲಿಯನ್ನೇ ಹುಡುಕಿಕೊಂಡು ಹೋಗಿ ಅದನ್ನು

4 ಷೇಕ್ ಅಲಿ ಬಿ. (2018). *ಕರ್ನಾಟಕ ಚರಿತ್ರೆ.* ಸಂ–2, ಪು. 143
5 ರಮೇಶ್ ಸ. ಚಿ. (2003). *ಪೂರ್ವೋಕ್ತ.* ಪು. 10
6 ಪೂರ್ಣಚಂದ್ರ ತೇಜಸ್ವಿ ಕೆ.ಪಿ. (2021). *ಕಾಡಿನ ಕತೆಗಳು ಭಾಗ–2. ಪೆದ್ದಚೆರುವಿನ ರಾಕ್ಷಸ.* ಪು.73–75
7 ಎಪಿಗ್ರಾಫಿಯಾ ಕರ್ನಾಟಿಕಾ. ಸಂ–12, (2003). ತರೀಕೆರೆ ಶಾ.ಸಂ–55 ದ್ಯಾಂಪುರ. ಪು.392.
8 ಎಪಿಗ್ರಾಫಿಯಾ ಕರ್ನಾಟಿಕಾ. ಸಂ–11, (2003). ಚಿಕ್ಕಮಗಳೂರು ಶಾ ಸಂ 92 ಅಂಬಳೆ ಪು–55.
9 ಇಸ್ಮಾಯಿಲ್ ಡಿ., ಶಾಸನ ಓದುಗರು ಬೀರೂರು ಇವರಿಂದ ಪಡೆದ ಮಾಹಿತಿ.

ಬೇಟೆಯಾಡಿ ಕೊಂದ ಪ್ರಸಂಗಗಳನ್ನು ನಾವು ನೋಡಬಹುದು. ಇದಕ್ಕೆ ಬೇಟೆ ಕೌಶಲ್ಯಗಳು ಮತ್ತು ತಂತ್ರಗಳು ತಿಳಿದಿರಬೇಕಿತ್ತು. ಹುಲಿ ತುಂಬಾ ಸೂಕ್ಷ್ಮ ಜಾತಿ ಪ್ರಾಣಿಯಾಗಿದ್ದು ಅದನ್ನು ಚಾಣಾಕ್ಷತೆಯಿಂದ ಬೇಟೆಯಾಡಬೇಕಾಗುತ್ತದೆ. ಹುಲಿ ಸಾಮಾನ್ಯವಾಗಿ ಓಡಾಡುವ ಸ್ಥಳದಲ್ಲಿ ಆಹಾರವಾಗಿ ಜೀವಂತ ಎತ್ತುಗಳನ್ನೊ, ಎಮ್ಮೆಗಳನ್ನೊ ಕಟ್ಟಿ ಹಾಕಲಾಗುತ್ತಿತ್ತು, ಬೇಟೆಗಾರ ಅಲ್ಲೇ ಹತ್ತಿರದಲ್ಲಿ ಮರೆಯಲ್ಲಿ ಮರಸು ಕಾಯುತ್ತಿದ್ದ. ಹುಲಿ ಬಂದ ತಕ್ಷಣ ಬೇಟೆಗಾರ ಕಾರ್ಯ ಪ್ರವೃತ್ತನಾಗಿ ಹುಲಿಯನ್ನು ಕೊಲ್ಲುವಲ್ಲಿ ಸಫಲನಾಗುತ್ತಿದ್ದ. ಬಳ್ಳಿಗನೂರು ಹುಲಿಬೇಟೆ ಸ್ಮಾರಕವು ಈ ತಂತ್ರವನ್ನು ಬಳಸಿ ಹುಲಿಯನ್ನು ಕೊಂದ ಬಗ್ಗೆ ತಿಳಿಸುತ್ತದೆ (ಚಿತ್ರ–ಬಳ್ಳಿಗನೂರು). ಸ್ಮಾರಕದ ಕೆಳಗಿನ ಹಂತದಲ್ಲಿ ಕಂಬವೊಂದಕ್ಕೆ ಎತ್ತನ್ನು ಕಟ್ಟಲಾಗಿದೆ, ಅದರ ಎದಿರಿಗೆ ಹುಲಿಯು ಎತ್ತಿನ ಮೇಲ ಆಕ್ರಮಣ ಮಾಡುವಂತೆ ಚಿತ್ರಿಸಲಾಗಿದೆ. ಬೇಟೆಗಾಗಿ ಬಳಸಲಾದ ಎತ್ತನ್ನು 'ದೀಹ' ಎಂದು ಕರೆಯಲಾಗಿದ್ದು, ಅಂದರೆ ಬೇಟೆಯ ಆಮಿಷಕ್ಕಾಗಿ ಕಟ್ಟಿದ ಪ್ರಾಣಿ ಎಂದರ್ಥ.[10] ಈ ತಂತ್ರದಲ್ಲಿ ದೊಡ್ಡ ಪ್ರಾಣಿಗಳನ್ನು ಬಳಸಲು ಕಾರಣ ಬಲಿಷ್ಠವಾದ ಈ ಪ್ರಾಣಿಗಳು ಬೇಗ ಹುಲಿಯ ಆಕ್ರಮಣಕ್ಕೆ ಸಿಲುಕದೆ ಪ್ರತಿರೋಧ ತೋರುತ್ತವೆ. ಹುಲಿ ಸಾಕಷ್ಟು ಪರಿಶ್ರಮವಹಿಸಬೇಕಾಗಿದ್ದು, ಬೇಟೆಯೆಡೆಗೆ ಗಮನವಹಿಸಿದ್ದಾಗ ಮರಸು ಕುಳಿತಿರುವ ಬೇಟೆಗಾರರು ಅದರ ಮೇಲೆ ದಾಳಿ ಮಾಡಿಕೊಲ್ಲುತ್ತಿದ್ದರು. ಈ ಮಾದರಿಯನ್ನು ಕ್ರೂರ ಪ್ರಾಣಿಗಳಾದ ಹುಲಿ, ಚಿರತೆಗಳನ್ನು ಬೇಟೆಯಾಡಲು ಬಳಸುತ್ತಾರೆ ಇದನ್ನು ಮರಸು ಬೇಟೆಯೆನ್ನುತ್ತಾರೆ.[11] ಎರಡನೇ ಹಂತವು ವೀರನ ಸ್ವರ್ಗಾರೋಹಣದ ಬಗ್ಗೆ ತಿಳಿಸುತ್ತದೆ. ಆದರೆ ವೀರನು ಹೇಗೆ ಮರಣ ಹೊಂದಿದನು ಎಂಬುದು ತಿಳಿಯದು. ಸ್ಮಾರಕದ ಕೆಳಗಿನ ಹಂತದಲ್ಲಿ ವೀರನನ್ನು ಚಿತ್ರಿಸಿಲ್ಲ. ಬಹುಶಃ ಮರಸು ಕುಳಿತ ವೀರನು ಹುಲಿಯು ಆಹಾರವನ್ನು ಅರಸುತ್ತಾ ಎತ್ತಿನ ಬಳಿ ಬಂದಾಗ ಕೊಲ್ಲಲು ಮುಂದಾಗಿದ್ದಾನೆ, ಆಗ ಹುಲಿ ವೀರನನ್ನು ಕೊಂದಿರಬಹುದು ಅಥವಾ ಆ ಸಂದರ್ಭದಲ್ಲಿ ಆದ ಗಾಯಗಳಿಂದ ವೀರ ಮರಣ ಹೊಂದಿರಬಹುದು ಎಂದು ಊಹಿಸಬಹುದು.

ಮರಸು ಬೇಟೆಗೆ ಮತ್ತೊಂದು ಉತ್ತಮ ಉದಾಹರಣೆಯೆಂದರೆ ಕುಮಾರಗಿರಿಯ ಹುಲಿಬೇಟೆ ವೀರಗಲ್ಲು. ಕಾಡಿನಲ್ಲಿ ಈ ಪ್ರಸಂಗ ನಡೆದಿರುವಂತಿದ್ದು, ಅದಕ್ಕಾಗಿ ಶಿಲ್ಪದಲ್ಲಿ ಮರದ ರಚನೆಯನ್ನು ತೋರಿಸಲಾಗಿದೆ. ಬೇಟೆಗಾರನೊಬ್ಬ ಮರದ ಮೇಲೆ ಮರಸು ಕಾಯುತ್ತಿದ್ದಾನೆ, ಇಬ್ಬರು ಬೇಟೆಗಾರರು ಹುಲಿಗೆ ಎದುರಾಗಿ ನಿಂತು ಹೋರಾಡುತ್ತಿದ್ದಾರೆ. ಬೇಟೆಗಾರನೊಬ್ಬ ಹುಲಿಗೆ ಬಾಣ ಪ್ರಯೋಗಿಸಿದ್ದು ಬಾಣವು ಎದೆಗೆ ನಾಟಿದೆ, ಗಾಯಗೊಂಡಿರುವ ಹುಲಿಯನ್ನು ಇನ್ನೊಂದು ಕೈಯಲ್ಲಿರುವ ಕತ್ತಿಯಿಂದ ಹೊಡೆಯಲು ಮುಂದಾಗಿರುವಂತೆ ಸನ್ನಿವೇಶವನ್ನು ಸೃಷ್ಟಿಸಲಾಗಿದೆ (ಚಿತ್ರ–ಕುಮಾರಗಿರಿ).

ಕಾಡಂಚಿನ ಗ್ರಾಮಗಳ ರೈತರಿಗೆ ಅವರ ಜಾನುವಾರುಗಳನ್ನು ಕಾಡು ಪ್ರಾಣಿಗಳಿಂದ ರಕ್ಷಿಸುವುದು ಸವಾಲಿನ ಕೆಲಸವೇ ಸರಿ. ಹುಲಿಯಂತಹ ದೊಡ್ಡ ಭಕ್ಷಕ ಜೀವಿಯು ಜಾನುಪಾರುಗಳನ್ನು ಸುಲಭದಲ್ಲಿ ಬೇಟೆಯಾಡುತ್ತದೆ. ಸೋಮನಹಳ್ಳಿಯ ಸಾ.ಶ 12ನೇ ಶತಮಾನದ ಸ್ಮಾರಕವು ಗೋಪಾಲಕನು ಹುಲಿಯೊಂದಿಗೆ ಹೋರಾಡುವ ಸನ್ನಿವೇಶವನ್ನು ನಿರೂಪಿಸುತ್ತದೆ.(ಚಿತ್ರ–ಸೋಮನಹಳ್ಳಿ) ದನಗಳನ್ನು ಮೇಯಿಸಲು ಹೋದಾಗ ಹುಲಿಯು ದನಗಳ ಮೇಲೆ ದಾಳಿ ಮಾಡಿದೆ ಆಗ ದನಕಾಯುವ ವ್ಯಕ್ತಿಯು ಹಠತ್ತನೆ ನಡೆದ ಹುಲಿ ದಾಳಿಗೆ ಹೆದರದೇ ಧೈರ್ಯದಿಂದ ಹುಲಿಯೊಂದಿಗೆ ಹೋರಾಡುತ್ತಾನೆ ಅವನ ಬಳಿ ಹುಲಿಯನ್ನು ಹೆದರಿಸುವ ಅಂತಹ ಆಯುಧಗಳೇನು ಇಲ್ಲ. ಉದ್ದವಾದ ಮರದ ತುಂಡೊಂದನ್ನು ಕೈಯಲ್ಲಿ

[10] ರಮೇಶ್ ಸ. ಚಿ. (2003). *ಪೂರ್ವೋಕ್ತ.* ಪು.14.
[11] ಮೇಲಿನದೇ. ಪು. 14.

ಹಿಡಿದಿದ್ದಾನೆ. ಅದನ್ನು ಬಿಟ್ಟರೆ ಅವನ ಬಳಿ ಇರುವುದು ಧೈರ್ಯವೊಂದೇ. ಹೋರಾಟದಲ್ಲಿ ಆತನು ಮರಣ ಹೊಂದಿದ್ದು ಅವನ ನೆನಪಿಗಾಗಿ ಈ ಸ್ಮಾರಕ ಹಾಕಿಸಲಾಗಿದೆ.

ಗ್ರಾಮದ ಜನರಿಗೆ ತೊಂದರೆ ಕೊಡುತ್ತಿದ್ದ ಹುಲಿಯನ್ನು ಅದು ಸಂಚರಿಸುವ ಭಾಗದಲ್ಲಿ ಕಾದು ಬೇಟೆಯಾಡುತ್ತಿದ್ದರು. ಈ ರೀತಿಯ ಬೇಟೆಗಾಗಿ ಸಾಕಷ್ಟು ತಯಾರಿಗಳನ್ನು ಬೇಟೆಗಾರರು ಮಾಡಿಕೊಂಡಿರುತ್ತಿದ್ದರು. ಅರಸಿನಗುಪ್ಪೆ ವೀರಗಲ್ಲು ಶಿಲ್ಪವು ಹುಲಿಬೇಟೆ ಸನ್ನಿವೇಶದ ನೈಜ ಚಿತ್ರಣದಂತೆ ಕಂಡುಬಂದಿದೆ. ಜನರು ಹುಲಿಯನ್ನು ಬೇಟೆಯಾಡಲು ಎಲ್ಲಾ ರೀತಿಯ ಸಿದ್ಧತೆಗಳನ್ನು ಮಾಡಿಕೊಂಡಿರುವಂತೆ ಕಂಡುಬಂದಿದೆ. ಪ್ರಸ್ತುತ ಬೇಟೆಗಾರನೊಬ್ಬ ಹುಲಿಗೆ ಎದುರಾಗಿ ಬಾಣವನ್ನು ಹೊಡೆದಿದ್ದಾನೆ ಬಾಣವು ಹುಲಿಯ ಬೆನ್ನಿನಿಂದ ಹೊರಗೆ ಬಂದಿದೆ. ಇಬ್ಬರು ವ್ಯಕ್ತಿಗಳು ಎತ್ತರದ ಸ್ಥಳದಲ್ಲಿ ಕುಳಿತು ಮರಸು ಕಾಯುತ್ತಿದ್ದು ಹುಲಿಯ ಮೇಲೆ ಬಾಣ ಪ್ರಯೋಗಿಸಲು ಸೂಕ್ತ ಸಮಯಕ್ಕಾಗಿ ಕಾಯುತ್ತಿದ್ದಾರೆ. ಮತ್ತೊಬ್ಬನು ಬೇಟೆ ನಾಯಿಯನ್ನು ಕೈಯಲ್ಲಿ ಹಿಡಿದಿದ್ದು ಹುಲಿಯನ್ನು ಆಕ್ರಮಿಸಲು ಸೂಚನೆ ನೀಡುತ್ತಿರುವಂತಿದೆ. ಇನ್ನೊಂದು ಬೇಟೆ ನಾಯಿಯು ಹುಲಿ ಮೇಲೆ ಎರಗುತ್ತಿದೆ. ನಾಯಿಗಳು ಸೂಕ್ತ ತರಬೇತಿ ಪಡೆದಿದ್ದು ಪ್ರಮುಖ ವಹಿಸಿದಂತೆ ಕಾಣುತ್ತದೆ. ಹೀಗೆ ಶಿಲ್ಪವು ಚಲನಶೀಲತೆಯಿಂದ ಕೂಡಿದೆ. (ಚಿತ್ರ–ಅರಸಿನಗುಪ್ಪೆ)

ಈ ಎಲ್ಲಾ ಪ್ರಸಂಗಗಳನ್ನು ಗಮನಿಸಿದಾಗ ಹುಲಿಯು ಗ್ರಾಮದ ಜನರಿಗೆ ದನಗಳ್ಳನಾಗಿಯೋ, ನರಭಕ್ಷಕನಾಗಿಯೋ ಉಪಟಳ ನೀಡುತ್ತಿದೆ. ಕಾಡು ಪ್ರಾಣಿಗಳನ್ನು ಬೇಟೆಯಾಡುತ್ತಿದ್ದ ಹುಲಿಯು ದನಗಳು, ಮನುಷ್ಯರನ್ನು ಬೇಟೆಯಾಡಲು ನಿರ್ಧಿಷ್ಟವಾದ ಕಾರಣಗಳಿಲ್ಲ, ಆದರೆ ಹುಲಿಯು ವಯೋಸಹಜವಾಗಿ ಕಾಡು ಪ್ರಾಣಿಗಳನ್ನು ಬೇಟೆಯಾಡಲು ಅಸಮರ್ಥವಾದ ಮೇಲೆ ಸುಲಭ ಬೇಟೆಯಾದ ದನಗಳು ಹಾಗೂ ಮನುಷ್ಯರನ್ನು ಕೊಂದು ತನ್ನ ಹಸಿವನ್ನು ನೀಗಿಸಿಕೊಳ್ಳಲು ಪ್ರಯತ್ನಿಸುತ್ತದೆ.[12]

ಬೇಟೆಗಾರರು ಕಾಡಿನಲ್ಲಿ ಬೇರೊಂದು ಪ್ರಾಣಿಯನ್ನು ಬೇಟೆಯಾಡಲು ಹೋದಾಗ ಅವರಿಗೆ ಹುಲಿ ಎದುರಾಗಿ ಅದರ ಜೊತೆಯಲ್ಲಿ ಹೋರಾಡುವ ಆಕಸ್ಮಿಕವಾಗಿ ಬಂದಿವೆ. ಇದು ಆಕಸ್ಮಿಕವಾದರೂ, ಬೇಟೆಗಾರರು ಇಂತಹ ಸನ್ನಿವೇಶ ಬರಬಹುದು ಎಂಬ ಮುನ್ಸೂಚನೆಯಿಂದ ಸಿದ್ಧರಾಗಿರುತ್ತಿದ್ದರು. ಜಿಂಕೆ ಬೇಟೆಗೆ ಹೋದ ಸಂದರ್ಭದಲ್ಲಿ ಹುಲಿ ಇದಿರಾದ ಸಂದರ್ಭಗಳನ್ನು ವಿವರಿಸುವ ವೀರಗಲ್ಲುಗಳು ನಮಗೆ ಕಳಸ ತಾಲ್ಲೂಕಿನಲ್ಲಿ ಕಂಡುಬಂದಿವೆ. ಈ ಎಲ್ಲಾ ವೀರಗಲ್ಲುಗಳು ಶಾಸನ ರಹಿತವಾಗಿದ್ದು, ಘಟನೆಯ ಚಿತ್ರಣವನ್ನು ಕಣ್ಣಿಗೆಕಟ್ಟುವಂತೆ ಶಿಲ್ಪವನ್ನು ಹೊಂದಿವೆ. ಈ ವೀರಗಲ್ಲುಗಳನ್ನು ಸಂಶೋಧಕರಾದ ಹೆಚ್. ಆರ್. ಪಾಂಡುರಂಗರವರು ಶೋಧಿಸಿದ್ದು ಭೈರವರಸರ ಕಾಲಕ್ಕೆ ಸೇರಿದವಾಗಿವೆ ಎಂದು ಅಭಿಪ್ರಾಯಿಸಿದ್ದಾರೆ.[13] ಸಂಸೆ ಗ್ರಾಮದ ವೀರಗಲ್ಲು ಶಿಲ್ಪದ ಕೆಳಗಿನ ಹಂತದಲ್ಲಿ ಜಿಂಕೆ ಬೇಟೆಗೆಂದು ಹೋದ ಬೇಟೆಗಾರರ ಗುಂಪಿಗೆ ಹಠಾತ್ತನೆ ಹುಲಿ ಎದುರಾಗಿದೆ. ಇಬ್ಬರು ಬೇಟೆಗಾರರು ನಾಲ್ಕು ಬೇಟೆ ನಾಯಿಗಳೊಂದಿಗೆ ಹೋರಾಡುತ್ತಿದ್ದಾರೆ. ಬೇಟೆಗಾರನೊಬ್ಬ ಹುಲಿಗೆ ಎದುರಾಗಿ ಬಾಣ ಪ್ರಯೋಗಿಸುತ್ತಿದ್ದಾನೆ. ಸುತ್ತಲೂ ಮೂರು ನಾಯಿಗಳು ಹುಲಿಯನ್ನು ಆಕ್ರಮಿಸಿವೆ. ಹೆದರಿದ ಜಿಂಕೆಯು ವಿರುದ್ಧ ದಿಕ್ಕಿನೆಡೆಗೆ ಓಡುತ್ತಿದ್ದು ನಾಯಿಯೊಂದು ಅದನ್ನು ಬೆನ್ನಟ್ಟಿದೆ.(ಚಿತ್ರ–ಸಂಸೆ) ಎರಡನೇ ಹಂತದಲ್ಲಿ ಇಬ್ಬರು ವೀರರನ್ನು ಪಲ್ಲಕ್ಕಿಯಲ್ಲಿ ಹೊತ್ತುಯ್ಯುವ ದೃಶ್ಯವಿದ್ದು ಹೆಚ್. ಆರ್. ಪಾಂಡುರಂಗರವರು ಇಬ್ಬರು ವೀರರು ಪಲ್ಲಕ್ಕಿಯಲ್ಲಿ ಜೊತೆಯಾಗಿ ಕುಳಿತು ಸೈನಿಕರೊಂದಿಗೆ ಬೇಟೆಗೆ

---

[12] ಸಾಕ್ಷಿ. (2019). *ಹೊಳಲ್ಕೆರೆಯ ನರಭಕ್ಷಕ ಮತ್ತು ಇತರ ಕೆನೆತ್ ಆಂಡರ್ಸನ್ ಕತೆಗಳು.* ಪು:36.

[13] ಪಾಂಡುರಂಗ. ಹೆಚ್. ಆರ್. (2022). ಕಳಸ ಸೀಮೆ–ಸಂಸೆ ಮೂರು ನಾಡಿನ ಅಪ್ರಕಟಿತ ವೀರಗಲ್ಲುಗಳು. *ಇತಿಹಾಸ ದರ್ಶನ–37*, ಪು.154–157.

ತೆರಳುತ್ತಿರುವ ಚಿತ್ರಣ ಎಂದು ಅಭಿಪ್ರಾಯಿಸಿದ್ದಾರೆ.[14] ಆದರೆ ಇದು ಸಮಂಜಸವೆಂದು ತೋರುವುದಿಲ್ಲ, ಏಕೆಂದರೆ ವೀರಗಲ್ಲುಗಳ ಶಿಲ್ಪದ ವಿವರಗಳೂ ವೀರಗಲ್ಲಿನ ತಳಭಾಗದಲ್ಲಿ ಆರಂಭವಾಗಿ ಮೇಲಕ್ಕೆ ಹೋಗುತ್ತವೆ ಆದರೆ ಯಾವ ವೀರಗಲ್ಲುಗಳಲ್ಲಿಯೂ ಘಟನೆ ಮೇಲಿಂದ ಆರಂಭವಾಗಿ ಕೆಳಕ್ಕೆ ನಿರೂಪಣೆಯಾಗಿರುವುದು ಕಂಡುಬಂದಿಲ್ಲ.[15] ಅಂತೆಯೇ ಮೊದಲನೇ ಹಂತದಲ್ಲಿ ಬೇಟೆಯ ಪ್ರಸಂಗ ಮುಗಿದಿದ್ದು, ಎರಡನೇ ಹಂತದಲ್ಲಿ ಅದರ ಮುಂದಿನ ಸನ್ನಿವೇಶದ ಚಿತ್ರಣವಾಗಿ ಗಾಯಗೊಂಡ ವೀರರನ್ನು ಪಲ್ಲಕ್ಕಿಯಲ್ಲಿ ಕರೆದುಕೊಂಡು ಹೋಗಿರಬಹುದು ಎಂದು ಊಹಿಸಬಹುದು.

ಬಸರೀಕಲ್ಲು ನಿರಂಜನ ಶೆಟ್ಟಿಯವರ ತೋಟದಲ್ಲಿರುವ ಹುಲಿಬೇಟೆ ವೀರಗಲ್ಲಿನ ಕೆಳಗಿನ ಹಂತವು ಬೇಟೆಗಾರರಿಬ್ಬರ ತಂಡಕ್ಕೆ ಹುಲಿಯೆದುರಾಗಿದೆ. ಇಬ್ಬರು ಬೇಟೆಗಾರರು ಹುಲಿಗೆ ಎದುರಾಗಿ ಬಾಣ ಪ್ರಯೋಗಿಸಲು ಮುಂದಾಗಿದ್ದು, ಬೇಟೆ ನಾಯಿಯೊಂದು ಇನ್ನೊಂದು ಬದಿಯಿಂದ ಹುಲಿ ಮೇಲೆ ಆಕ್ರಮಣ ಮಾಡುತ್ತಿದೆ. ಉಳಿದ ನಾಲ್ಕು ನಾಯಿಗಳು ಜಿಂಕೆಯನ್ನು ಬೆನ್ನತ್ತಿವೆ. ಬಹುಶಃ ಜಿಂಕೆ ಬೇಟೆಗೆಂದು ಬಂದಿದ್ದ ಬೇಟೆಗಾರರಿಗೆ ಹುಲಿ ಎದುರಾಗಿ ಹುಲಿಯೊಂದಿಗೆ ಹೋರಾಡುವ ಪ್ರಸಂಗ ಬಂದಿದೆ ಎಂದು ಊಹಿಸಬಹುದು.(ಚಿತ್ರ–ಬಸರೀಕಲ್ಲು) ಎರಡನೇ ಹಂತದಲ್ಲಿ ಗಾಯಗೊಂಡ ವೀರರನ್ನು ಪಲ್ಲಕ್ಕಿಯಲ್ಲಿ ಹೊತ್ತೊಯ್ಯಲಾಗುತ್ತಿದೆ. ಕುದುರೆಮುಖದ ಕಾವೇರಿ ಮಾರ್ಕೆಟ್‌ನ ಹಿಂಭಾಗದಲ್ಲಿರುವ ಸ್ಮಾರಕವು ಈಮೇಲಿನ ವೀರಗಲ್ಲುಗಳಂತೆ ಹುಲಿ ಹಾಗೂ ಜಿಂಕೆ ಬೇಟೆಯ ಸ್ಮಾರಕವೇ ಆಗಿದೆ. ಕೆಳಗಿನ ಹಂತದಲ್ಲಿ ಬೇಟಗಾರನೊಬ್ಬ ಮೇಲೆ ಎರಗಲು ಪ್ರಯತ್ನಿಸುತ್ತಿರುವ ಹುಲಿಗೆ ಎದುರಾಗಿ ಬಾಣ ಪ್ರಯೋಗಿಸುತ್ತಿದ್ದಾನೆ, ಈತನಿಗೆ ಸೇವಕನೊಬ್ಬ ರಾಜಛತ್ರಿ ಹಿಡಿದಿದ್ದು ರಾಜ ಪರಿವಾರಕ್ಕೆ ಸೇರಿದವನಿರಬೇಕು. ಇನ್ನೊಬ್ಬ ಬೇಟೆಗಾರ ಹುಲಿ ಬಾಲವನ್ನು ಹಿಡಿದು ಕತ್ತಿಯಿಂದ ಬೆನ್ನಿಗೆ ಇರಿಯುತ್ತಿದ್ದಾನೆ. ಎರಡನೇ ಹಂತದಲ್ಲಿ ಗಾಯಗೊಂಡ ವೀರನನ್ನು ಪಲ್ಲಕ್ಕಿಯಲ್ಲಿ ಹೊತ್ತೊಯ್ಯಲಾಗುತ್ತಿದೆ. ಮೂರನೇ ಹಂತವು ಸ್ವರ್ಗಾರೋಹಣವಾಗಿದೆ. (ಚಿತ್ರ–ಕುದುರೆಮುಖ)

ಕುದುರೆಮುಖ ವ್ಯಾಪ್ತಿಯ ನೆಲ್ಲಿಬೀಡು ಗ್ರಾಮದ ಕೆಳಮನೆ ಪುಟ್ಟಯ್ಯರವರ ಜಮೀನಿನಲ್ಲಿರುವ ವೀರಗಲ್ಲನ್ನು ಕೆ. ಎನ್. ಸುಪ್ರೀತರವರು ಶೋಧಿಸಿದ್ದು, ಇದು ಸಹ ಜಿಂಕೆ ಹಾಗೂ ಹುಲಿಬೇಟೆಯ ಬಗ್ಗೆ ತಿಳಿಸುತ್ತದೆ.[16] ಆರು ಹಂತಗಳನ್ನು ಒಳಗೊಂಡಿರುವ ಸ್ಮಾರಕದ ಕೆಳಗಿನ ಹಂತವು ಐದು ಬೇಟೆನಾಯಿಗಳನ್ನೊಳಗೊಂಡ ಇಬ್ಬರು ಬೇಟೆಗಾರರ ತಂಡವು ಜಿಂಕೆ ಬೇಟೆಗೆಂದು ಹೋದಾಗ ಆಕಸ್ಮಿಕವಾಗಿ ಹುಲಿ ಎದುರಾಗಿದೆ. ಆಗ ಒಬ್ಬ ಬೇಟೆಗಾರನು ಹುಲಿಗೆ ಎದುರಾಗಿ ಬಾಣ ಪ್ರಯೋಗಿಸುತ್ತಿದ್ದು ಎರಡು ನಾಯಿಗಳು ಹುಲಿಯನ್ನು ಆಕ್ರಮಿಸಿ ಬೇಟೆಗಾರನಿಗೆ ಸಹಕರಿಸುತ್ತಿವೆ. ಹೆದರಿದ ಜಿಂಕೆಯು ಓಡುತ್ತಿದ್ದು, ಇನ್ನೊಬ್ಬ ಬೇಟೆಗಾರನು ಮೂರು ನಾಯಿಗಳೊಂದಿಗೆ ಜಿಂಕೆಯನ್ನು ಬೆನ್ನಟ್ಟಿದ್ದಾನೆ. ಎರಡನೇ ಹಂತದಲ್ಲಿ ನಾಲ್ಕು ಜನ ಬೇಟೆಗಾರರು ಎರಡು ನಾಯಿಗಳೊಂದಿಗೆ ಜಿಂಕೆಯನ್ನು ಬೇಟೆಯಾಡುತ್ತಿದ್ದಾರೆ. ಮೂರನೇ ಹಂತದಲ್ಲಿ ಸಮುದ್ರ ಮಂಥನದ ದೃಶ್ಯವನ್ನು ತೋರಿಸಲಾಗಿದೆ. "ಒಂದು ಅಭಿಪ್ರಾಯದಂತೆ ಶತ್ರು ಪಡೆಯನ್ನು ದಾನವರಂತೆ ಹಾಗೂ ವೀರನ ಸೇನೆಯನ್ನು ದೇವರಂತೆ ತೋರಿಸಿರಬಹುದು. ಇನ್ನೊಂದು ಅಭಿಪ್ರಾಯದ ಪ್ರಕಾರ ದಾನವರಿಗೂ ದೇವರಿಗೂ ಅಮೃತಕ್ಕೋಸ್ಕರ ಯುದ್ಧವಾದ ಹಾಗೇ ಶತ್ರು ಪಡೆಗೂ ವೀರರಿಗೂ ಭೂಮಿಯ ವಿಚಾರದಲ್ಲಿ ಯುದ್ಧವಾಗಿರಬಹುದು." ಎಂದು ಕೆ. ಎನ್.

14 ಪಾಂಡುರಂಗ. ಹೆಚ್. ಆರ್. (2022). ಪೂರ್ವೋಕ್ತ. ಪು.154.

15 ಶೇಷಶಾಸ್ತ್ರಿ. ಆರ್. (2017). *ಕರ್ನಾಟಕದ ವೀರಗಲ್ಲುಗಳು.* ಪು. 238–239.

16 ಸುಪ್ರಿತಾ ಕೆ.ಎನ್. (2021). ಕಳಸ ಪರಿಸರದಲ್ಲಿನ ಜಿಂಕೆ ಬೇಟೆ ವೀರಗಲ್ಲುಗಳ ವಿಶ್ಲೇಷಣೆ. *ಇತಿಹಾಸ ದರ್ಶನ*–36, ಪು. 197–198.

ಸುಪ್ರೀತರವರು ಅಭಿಪ್ರಾಯಿಸಿದ್ದಾರೆ.[17] ಬೇಟೆಯ ವಿಚಾರವಾಗಿ ಎರಡು ಗುಂಪುಗಳ ನಡುವೆ ಜಗಳವಾಗಿರಬಹುದಾಗಿದ್ದು ಸಂಶೋಧಕರ ಮೊದಲ ಅಭಿಪ್ರಾಯವನ್ನು ಒಪ್ಪಬಹುದು. ಆದರೆ ಎರಡನೇ ಅಭಿಪ್ರಾಯವು ಸಮಂಜಸವಲ್ಲ ಏಕೆಂದರೆ ಈ ವೀರಗಲ್ಲು ಬೇಟೆಯ ಬಗ್ಗೆ ತಿಳಿಸುತ್ತದೆ ಹೊರತು ಯಾವುದೇ ಭೂಮಿಗಾಗಿ ನಡೆದ ಜಗಳವನ್ನಲ್ಲ. ವೀರಗಲ್ಲಿನಲ್ಲಿ ಎರಡು ಹಂತದಲ್ಲಿ ಬೇಟೆಯ ಚಿತ್ರಣವನ್ನು ತೋರಿಸಲಾಗಿದ್ದು, ಒಂದು ತಂಡವು ಜಿಂಕೆಯನ್ನು ಬೆನ್ನಟ್ಟಿದ್ದು ಅವರಿಗೆ ಹುಲಿ ಎದುರಾಗಿದೆ, ಆಗ ಇನ್ನೊಂದು ತಂಡದವರು ಆ ಜಿಂಕೆಯನ್ನು ಬೇಟೆಯಾಡಿದ್ದು ಎರಡು ತಂಡದವರಿಗೂ ಜಗಳವಾಗಿರಬಹುದು. ಒಂದು ಜಿಂಕೆಗಾಗಿ ಎರಡು ಬೇಟೆಗಾರ ತಂಡಗಳಿಗೆ ನಡೆದ ಜಗಳವನ್ನು ಸಮುದ್ರ ಮಂಥನವು ಸಾಂಕೇತಿಸಿರಬಹುದು ಎಂದು ಊಹಿಸಬಹುದು. ಆದರೂ ಪ್ರಸ್ತುತದಲ್ಲಿ ಸಮುದ್ರ ಮಂಥನ ಸನ್ನಿವೇಶದ ಔಚಿತ್ಯವೇನು ಎಂಬ ಬಗ್ಗೆ ವಿದ್ವಾಂಸರು ಉತ್ತರಿಸಬೇಕು. ನಾಲ್ಕನೇ ಹಂತದಲ್ಲಿ ಗಾಯಗೊಂಡ ಬೇಟೆಗಾರರನ್ನು ಪಲ್ಲಕ್ಕಿ ಮೇಲೆ ಸಾಗಿಸಲಾಗುತ್ತಿದೆ. (ಚಿತ್ರ–ನೆಲ್ಲಿಬೀಡು) ಈ ಪ್ರಸಂಗಗಳು ಆಕಸ್ಮಿಕವಾಗಿ ಸಂಭವಿಸಿದರೂ ಸಹ ಮಡಿದ ವೀರರು ತಮ್ಮ ಬೇಟೆ ಕೌಶಲ್ಯದಿಂದ ಹುಲಿಗಳನ್ನು ಕೊಂದಿರುವುದನ್ನು ಗಮನಿಸಬಹುದು.

ಹುಲಿಯೊಂದಿಗೆ ಹೋರಾಡಿ ಮಡಿದವರು ಸಹ ವೀರರು ಎಂಬ ಭಾವನೆ ಆಗಿನ ಜನರಲ್ಲಿತ್ತು. ಹಾಗಾಗಿ ಅವರಿಗೂ ವೀರಗಲ್ಲುಗಳನ್ನು ಹಾಕಿಸಲಾಗಿದೆ. ಮೇಲಿನ ಎಲ್ಲಾ ಸಂದರ್ಭಗಳಲ್ಲೂ ಮಡಿದ ವೀರರಿಗಾಗಿ ಸ್ಮಾರಕಗಳನ್ನು ಹಾಕಿಸಲಾಗಿದೆ. ಆದರೆ ಯಾರು ಹಾಕಿಸಿದರು ಎಂಬುದು ತೀಳಿಯುವುದಿಲ್ಲ ಆದರೆ ತಳಿಹಳ್ಳದ ಸ್ಮಾರಕವನ್ನು ಶಾಸನವು ತಿಳಿಸುವಂತೆ ವೀರನೊಬ್ಬ (ಹೆಸರು ತೃಟಿತವಾಗಿದೆ) ಹುಲಿಯನಿರಿದು ಮೃತನಾದನು, ಹೊಂನಬೆ ಮತ್ತಿತರರು ವೀರಗಲ್ಲು ಮಾಡಿಸಿದರು.[18] ಹೋಂನಬೆ ಮತ್ತಿತರು ವೀರನ ಸಂಬಂಧಿಕರಿಬಹುದು. ಹುಲಿಬೇಟೆ ಸುಲಭದ ಕೆಲಸವಲ್ಲ ಅದಕ್ಕಾಗಿ ಅಗಾಧವಾದ ಧೈರ್ಯ ಹಾಗೂ ಚಾಣಾಕ್ಷತೆಬೇಕು. ಹುಲಿಗೆ ಕಿವಿ, ಕಣ್ಣು ಸೂಕ್ಷ್ಮ. ಇಂತಹ ಪ್ರಾಣಿಯೊಂದಿಗೆ ಹೋರಾಡಿ, ಅದರ ಉಪಟಳವನ್ನು ಅಡಗಿಸಿ ಸ್ವರ್ಗಸ್ತರಾದ ವೀರರ ಸಾಹಸ ಮೆಚ್ಚಿ ಅವರ ಕುಟುಂಬಕ್ಕೆ ಆಳುವ ವರ್ಗದವರು ಭೂಧಾನ ನೀಡಿದ್ದಾರೆ. ಕಿರಿಇಂಗಳದ ತಮ್ಮನು ಹುಲಿಯನಿರಿದು ಸತ್ತಾಗ ಗಂಗ ಪೆರ್ಮಾಡಿ 5 ಕುಳ ಭೂಮಿಯನ್ನು ದಾನ ನೀಡಿದನು.[19] ಈ ಮೇಲಿನ ಸ್ಮಾರಕಗಳಲ್ಲಿ ಹುಲಿ ಜನರಿಗೆ ಉಪಟಳ ನೀಡುತ್ತಿದ್ದು ಗ್ರಾಮದ ಮೇಲೆ ಹಾಗೂ ದನಗಳ ಮೇಲೆ ದಾಳಿ ಮಾಡಿದ ಸಂದರ್ಭದಲ್ಲಿ ಅವುಗಳನ್ನು ಕೊಲ್ಲಲಾಗಿದೆ.

ಹುಲಿಬೇಟೆಗಾಗಿ ಬೇಟೆಗಾರರಿಗೆ ಆಯುಧಗಳ ಅವಶ್ಯಕತೆ ತುಂಬಾಯಿದೆ. ಯೋಜಿತ ತಯಾರಿ ಹಾಗೂ ಆಯುಧಗಳಿಲ್ಲದೇ ಹುಲಿಯನ್ನು ಕೊಲ್ಲಲು ಸಾಧ್ಯವಿಲ್ಲ. ಲೋಹ ಹಾಗೂ ಮರದಿಂದ ಮಾಡಿದ ಆಯುಧಗಳನ್ನು ಬಳಸಲಾಗಿದೆ. ಕತ್ತಿ, ಕಠಾರಿ, ಈಟಿ, ಚಾಕುಗಳಂತಹ ಹರಿತವಾದ ಆಯುಧಗಳನ್ನು ಬಳಸಿಕೊಂಡಿದ್ದಾರೆ. ಅಂಬಳೆ ಗ್ರಾಮ ವೀರಗಲ್ಲು ಶಿಲ್ಪವನ್ನು ಅವಲೋಕಿಸಿದಾಗ, ವೀರನು ಹುಲಿಯ ಎದೆಗೆ ಕತ್ತಿಯಿಂದ ಇರಿದಿರುವುದನ್ನು ಕಾಣಬಹುದು (ಚಿತ್ರ–ಅಂಬಳೆ) ತಳಿಹಳ್ಳ ವೀರನು ಹುಲಿಯನಿರಿದು ಕೊಂದು ಸಾಯಿಸುತ್ತಾನೆ, ಇರಿದು ಕೊಲ್ಲಲು ಈ ರೀತಿಯ ಆಯುಧಗಳನ್ನೇ ಬಳಸಿಕೊಳ್ಳಲಾಗಿದೆ. ತರೀಕೆರೆ ತಾಲ್ಲೂಕಿನ ಲಕ್ಕವಳ್ಳಿ ರಂಗನಾಥ ಸ್ವಾಮಿ ದೇವಾಲಯದಲ್ಲಿರುವ ಅಸ್ಪಷ್ಟವಾದ ವೀರಗಲ್ಲು ವೀರನೊಬ್ಬ ಹುಲಿಯನ್ನು ಕಠಾರಿಯಿಂದ ಇರಿದು ಕೊಲ್ಲಲು ಪ್ರಯತ್ನಿಸುತ್ತಿರುವುದನ್ನು ವಿವರಿಸುತ್ತದೆ.

[17] ಸುಪ್ರಿತಾ ಕೆ.ಎನ್. (2021). ಪೂರ್ವೋಕ್ತ. ಪು. 197–198.

[18] ನಾಗರಾಜರಾವ್ ಹೆಚ್.ಎಮ್. (2008). *ಶಿವಶೋಧ.* ಪು.80.

[19] ಎಪಿಗ್ರಾಫಿಯಾ ಕರ್ನಾಟಿಕಾ. ಸಂ–12. (2003). ಕಡೂರು ಶಾ.ಸಂ. 92, ಚಿಕ್ಕಿಂಗಳ. ಪು. 106.

ಕುಮಾರಗಿರಿಯ ವೀರಗಲ್ಲಿನಲಗಲೂ ವೀರನು ಒಂದು ಕೈಯಲ್ಲಿ ಬಿಲ್ಲು ಹಿಡಿದಿದ್ದು, ಬಲಗೈನಲ್ಲಿ ಕತ್ತಿಯಿನ್ನು ಹಿಡಿದು ಹುಲಿಯ ಮೇಲೆ ಆಕ್ರಮಣ ಮಾಡಲು ಪ್ರಯತ್ನಿಸುತ್ತಿದ್ದಾನೆ. ಸಾ.ಶ 15–16ನೇ ಶತಮಾನದ ನಂತರದಲ್ಲಿ ಬಂದೂಕುಗಳ ನೇರವಿನಿಂದ ಹುಲಿಬೇಟೆ ನಡೆದಿದೆ. ಬಂದೂಕುಗಳ ಬಳಕೆಯು ಬೇಟೆ ನಿರ್ಬಂದವಾಗುವವರೆಗೆ ನಡೆದಿದೆ.

ಬೇಟೆಯಲ್ಲಿ ನಾಯಿಗಳ ಪಾತ್ರ ಪ್ರಮುಖವಾದುದು. ಬೇಟೆ ನಾಯಿಗಳೆಂದೇ ಕರೆಸಿಕೊಳ್ಳುವ ನಾಯಿಗಳು ಬೇಟೆಯಲ್ಲಿ ಪ್ರಾಣಿಗಳನ್ನು ಪತ್ತೆಹಚ್ಚಲು ಪ್ರಮುಖ ಪಾತ್ರವಹಿಸುತ್ತವೆ. ಬೇಟೆ ನಾಯಿಗಳು ಹೇಗಿರಬೇಕೆಂದು ಸ. ಚಿ. ರಮೇಶ್‌ರವರು “ಎಲ್ಲಾ ನಾಯಿಗಳು ಬೇಟೆಗೆ ಬರುವುದಿಲ್ಲ, ತೆಳು ಸೊರಬ, ಅಗಲವಾದ ಎದೆ, ನೆಟ್ಟಗೆ ನಿಂತಿರುವ ಕಿವಿ, ಬಾಗಿದ ಹುಬ್ಬು, ದಪ್ಪ ಕಾಳು, ನೆಲವನ್ನು ಮುಟ್ಟಿದ ಉಗುರುಗಳಿರಬೇಕು. ಇಂಥ ನಾಯಿಗಳು ಕುದುರೆಯಂತಹ ವೇಗವಾಗಿ ಓಡಿ, ಅಡ್ಡಲಾಗಿ ಹರಿದು ಸೇವಕನಂತೆ ಆಲಸ್ಯ ಮಾಡದೆ, ಯೋಗ್ಯನಂತೆ ನಂಬಿಸಿ, ಉರಿಯು ಹರಡುವಂತೆ ಹರಡಿಕೊಳ್ಳುವವು. ಈ ನಾಯಿಗಳು ಮೃಗದ ಹೆಜ್ಜೆಯ ಗುರುತನ್ನು ಅರಿತು ಆದಾರಿಯಲ್ಲಿ ನುಸುಳಿ ಬೇಟೆಯಾಡುತ್ತದೆ. ಬೇಟೆಗಾರರು ಈ ಲಕ್ಷಣಗಳನ್ನುಳ್ಳ ನಾಯಿಗಳನ್ನು ಮಾತ್ರ ಬೇಟೆಗೆ ಆಯಕೆ ಮಾಡಿಕೊಳ್ಳುತ್ತಾರೆ. ಮೇಲಿನ ಲಕ್ಷಣ ಹೊಂದಿದ ನಾಯಿಗಳು ತಮ್ಮ ಯಜಮಾನನಿಗೆ ತೊಂದರೆ ಉಂಟಾದರೆ ತನ್ನ ಪ್ರಾಣವನ್ನು ಲೆಕ್ಕಿಸದೆ ರಕ್ಷಣೆಗೆ ನಿಲ್ಲುತ್ತವೆ” ಎಂದು ಹೇಳುತ್ತಾರೆ. ಈ ರೀತಿಯಾಗಿ ನಾಯಿಗಳನ್ನು ಬಳಸಿಕೊಂಡು ಬೇಟೆಯಾಡುವುದಕ್ಕೆ ‘ಶ್ವಗಣಿಕ ಮಾರ್ಗ’ ಎಂದು ಕರೆಯಲಾಗಿದೆ.[20]

ಜೈಮಿನಿ ಭಾತರದ ಕತೃ ಪ್ರಾಣಿಗಳನ್ನು ಬೇಟೆಯಾಡುವ ನಾಯಿಗಳು ಯಾವ ಲಕ್ಷಣಗಳನ್ನು ಹೊಂದಿರಬೇಕು ಎಂಬುದನ್ನು ಈ ಕೆಳಗಿನಂತೆ ತಿಳಿಸುತ್ತಾನೆ.

> ***“ಉಬ್ಬಿದುರುದೇರದೆಗೆದೊಡಲ ಬಾಗಿದ ಬೆನ್ನ***
> ***ಪಬ್ಬುಗೆಯ ಪಚ್ಚಳದ ಸೆಡೆದ ಬಾಲದ ಕೊನೆಯ***
> ***ಕೊಬ್ಬಿದ ಕೊರಳ ಸಣ್ಣ ಜಂಘಗಳ ಕೊಂಕುಗುರ ಮಡಗಿವಿಯ ಕಿಡಿಗಂಗಳ***
> ***ಹೆಬ್ಬಲ್ಲ ಬಿಡುವಾಯ ದೇಲ್ವ ಕೆನ್ನಾಲಗೆಯ***
> ***ಗಬ್ಬಿ ನಾಯ್ಗಳ ಹಾಸನಿಗಿದು ಬಿಡೆಪಂದಿಗಳ***
> ***ನಬ್ಬರಿಸಿ ತುಡುಕಿದವು ಕೇಸರಿಯ ಮೇಲ್ವಾಯ್ದಡರ್ದು ಪುಲಿಯಂ ಕೊಂದವು”***[21]

**ಬೇಟೆಯ ಸಂದರ್ಭದಲ್ಲಿ** ಮಾನವನಿಗೆ ಆಯುಧಗಳಷ್ಟೇ ಮುಖ್ಯವಾಗಿ ನಾಯಿಯು ಪ್ರಮುಖ ಪಾತ್ರವಹಿಸುತ್ತಿತ್ತು. ಬೇಟೆಯಾಡಲಿರುವ ಪ್ರಾಣಿಯನ್ನು ಗುರುತಿಸಿದ ಬೇಟೆಗಾರ ಅವುಗಳ ಮೇಲೆ ನಾಯಿಯನ್ನು ಬಿಟ್ಟು ಹೋರಾಡುವಂತೆ ತಾನು ದೂರದಲ್ಲಿ ನಿಂತಿದ್ದು, ತನ್ನ ನಾಯಿಗಳಿಗೆ ಏಟು ಬೀಳದಂತೆ ಪ್ರಾಣಿಯನ್ನೇ ಗುರಿಯಿಟ್ಟು ಶಸ್ತ್ರಪ್ರಯೋಗ ಮಾಡುವ[22] ಶ್ವಗಣಿಕ ಮಾರ್ಗ ಮುಖಾಂತರ ನಾಯಿಗಳನ್ನು ಬಳಸಿಕೊಂಡು ಬೇಟೆಯಾಡುತ್ತಿದ್ದರು.

ನಮ್ಮ ಅಧ್ಯಯನ ಪ್ರದೇಶದ ಹುಲಿಬೇಟೆ ವೀರಗಲ್ಲುಗಳನ್ನು ಗಮನಿಸಿದಾಗ ಕಳಸ ಪ್ರದೇಶಗಳನ್ನೊಳಗೊಂಡ ಪಶ್ಚಿಮಘಟ್ಟ ಪ್ರದೇಶದಲ್ಲಿ ಬೇರೊಂದು ಪ್ರಾಣಿಯನ್ನು ಬೇಟೆಯಾಡಲು ಹೋದಾಗ ಬೇಟೆಗಾರರಿಗೆ ಆಕಸ್ಮಿಕವಾಗಿ ಹುಲಿ ಎದುರಾಗಿ ಆದರೊಂದಿಗೆ ಹೋರಾಡುವ ಸಂದರ್ಭ ಬಂದಿದೆ. ಅರೆಮಲೆನಾಡು ಪ್ರದೇಶವಾದ ತರೀಕೆರೆ, ಕಡೂರು, ಚಿಕ್ಕಮಗಳೂರಿನ ಕೆಲವು ಭಾಗಗಳಲ್ಲಿ ಹುಲಿಬೇಟೆಯು ರಕ್ಷಣಾ ಬೇಟೆಯಾಗಿದ್ದು ಹುಲಿಯಿಂದ ತೊಂದರೆಗೊಳಗಾಗಿ ಅದನ್ನು ಕೊಲ್ಲಲು ಪ್ರಯತ್ನಿಸಲಾಗಿದೆ. ಇದು ಕೆಲವು ಸಂದರ್ಭಗಳಲ್ಲಿ ಆಕಸ್ಮಿಕವಾಗಿದ್ದು, ಕೆಲವು ಸಂದರ್ಭದಲ್ಲಿ ತಂತ್ರಗಳನ್ನು

[20] ಸುಪ್ರಿತಾ ಕೆ.ಎನ್. (2021). ಪೂರ್ವೋಕ್ತ, ಪು. 197–198.

[21] ದೇವುಡು ನರಸಿಂಹಶಾಸ್ತ್ರೀ (ಸಂ). ಬ. ಶಿವಮೂರ್ತಿಶಾಶಸ್ತ್ರೀ, 1956, ಮಹಾಕವಿ ಲಕ್ಷ್ಮೀಶ ವಿರಚಿತ ಕನ್ನಡ ಜೈಮಿನಿ ಭಾರತ. ಪು:327.

[22] ಶೇಷಶಾಸ್ತ್ರಿ. ಆರ್., 2017. ಕರ್ನಾಟಕದ ವೀರಗಲ್ಲುಗಳು. ಪು:116.

ಬಳಸಿ ಕೊಂದ ಉದಾಹರಣೆಗಳನ್ನು ನೋಡಬಹುದು.

ಪ್ರಸ್ತುತದಲ್ಲೂ ಹುಲಿಬೇಟೆ ನಡೆಯುತ್ತಲೇ ಬಂದಿರುವುದು ಕಂಡುಬರುತ್ತದೆ. ಕಾಲ ಕಳೆದಂತೆ ಹುಲಿಬೇಟೆಯ ಸ್ವರೂಪ ಹಾಗೂ ಉದ್ದೇಶಗಳು ಬದಲಾಗುತ್ತಾ ಬಂದಿವೆ. ಕಾಡಂಚಿನ ಪ್ರದೇಶದಲ್ಲಿ ರೈತರು ಸಾಕುತಿದ್ದ ಪ್ರಾಣಿಗಳನ್ನು ತಿನ್ನುತ್ತಿದ್ದವು. ಕೆಲವು ಸಂಧರ್ಭದಲ್ಲಿ ಊರಿನ ಒಳಗೆ ಬಂದು ಜನರಿಗೆ ತೊಂದರೆ ಕೊಡುತ್ತಿದ್ದವು, ಇದರಿಂದ ಸಾಕು ಪ್ರಾಣಿಗಳಿಗೆ ಹಾಗೂ ಜನರಿಗೆ ಜೀವ ಭಯವಿದ್ದುದರಿಂದ ಹುಲಿಯನ್ನು ಕೊಲ್ಲಲಾಗಿತ್ತಿತ್ತು. ಇಂತಹ ಸಂದರ್ಭಗಳಲ್ಲಿ ಹುಲಿಯೇ ಪ್ರಾಣಿಗಳನ್ನು ತಿನ್ನಲು ಬಂದಾಗ ಅಥವಾ ಅಂತಹ ಹುಲಿಯನ್ನು ಹುಡುಕಿಕೊಂಡು ಹೋಗಿ ಬೇಟೆಯಾಡುತ್ತಿದ್ದರು. ಈ ಸ್ವರೂಪದ ಬೇಟೆಯನ್ನು ರಕ್ಷಣಾ ಬೇಟೆ ಎಂದು ಕರೆಯಬಹುದು. ಹುಲಿಯನ್ನು ಬೇಟೆಯಾಡಲು ಕೌಶಲ್ಯ ಬೇಕು, ನುರಿತ ತಂತ್ರಗಾರರು ಮಾತ್ರ ಹುಲಿಯನ್ನು ಯಶಸ್ವಿಯಾಗಿ ಬೇಟೆಯಾಡುತ್ತಿದ್ದರು. ಈ ಮೇಲಿನ ಎಲ್ಲಾ ಸಂದರ್ಭಗಳಲ್ಲಿ ವೀರನು ಮರಣ ಹೊಂದಿದ್ದಾನೆ. ಕಾರಣ ಆ ಸಂದರ್ಭದಲ್ಲಿ ಆದ ಮಾರಣಾಂತಿಕ ಗಾಯಗಳಿಂದ ವೀರನು ಮರಣ ಹೊಂದಿದ್ದಾನೆ. ಶಾಸನಗಳು 'ಹುಲಿಯನಿರುದು' ಎಂದು ಹೇಳಿವೆಯಾದರೂ ಹುಲಿ ಮರಣ ಹೊಂದಿದ ಬಗ್ಗೆ ಖಚಿತತೆ ಇಲ್ಲ. ಗಾಯಗೊಂಡ ಹುಲಿಯು ವೀರನನ್ನು ಕೊಂದು ಅಥವಾ ಮಾರಣಾಂತಿಕ ಗಾಯಗಳನ್ನು ಮಾಡಿ ಹೋಗಿರುವು ಸಾಧ್ಯತೆಗಳು ಇವೆ.

ಪ್ರಾಚೀನ ಕಾಲದಲ್ಲೇ ಹೆಚ್ಚು ಹುಲಿಬೇಟೆ ವೀರಗಲ್ಲುಗಳು ಕಂಡುಬಂದಿವೆ. ಸಾ.ಶ 15–16ನೇ ಶತಮಾನದ ನಂತರದಲ್ಲಿ ಹುಲಿಬೇಟೆ ವೀರಗಲ್ಲುಗಳು ಕಡಿಮೆಯಾದಂತೆ ಕಂಡುಬರುತ್ತವೆ. ಇದಕ್ಕೆ ಕಾರಣ ಸಾಂಪ್ರದಾಯಿಕ ಆಯುಧಗಳ ಜಾಗದಲ್ಲಿ ಬಂದೂಕು ಕಾಣಿಸಿಕೊಂಡದ್ದು ಇರಬಹುದು. ಬೇಟೆಗಾರ ಹುಲಿಗೆ ಮುಖಾಮುಖಿಯಾಗಿ ಹೋರಾಡುವ ಬದಲು ದೂರದಲ್ಲಿರುವಾಗಲೇ ಹೊಡೆದು ಕೊಲ್ಲುವ ಅವಕಾಶ ಬಂದೂಕಿನ ಉಪಯೋಗದಿಂದ ಇರುವುದರಿಂದ ಬೇಟೆಗಾರರು ಮರಣ ಹೊಂದುವ ಸನ್ನಿವೇಶಗಳು ಕಡಿಮೆ.

ನಮ್ಮ ಅಧ್ಯಯನ ಪ್ರದೇಶವಾದ ಚಿಕ್ಕಮಗಳೂರು ಪರಿಸರದಲ್ಲಿ ಸ್ವತಂತ್ರ್ಯ ಪೂರ್ವದಲ್ಲಿ ಹುಲಿಬೇಟೆ ನಡೆಯುತ್ತಿದ್ದುದು ಕೆನತ್ ಆಂಡರ್ಸನ್‌ರವರ ಬರವಣಿಗೆಗಳಿಂದ ತಿಳಿದುಬರುತ್ತದೆ. ಈ ಪ್ರದೇಶವು ದಟ್ಟವಾದ ಕಾಡುಗಳಿಂದ ಆವೃತ್ತವಾದ ಪ್ರದೇಶವಾಗಿದ್ದು ಹುಲಿಗಳ ಆವಾಸ ಸ್ಥಳವಾಗಿತ್ತು. ಸ್ವಾತಂತ್ರ್ಯ ಪೂರ್ವದಲ್ಲಿನ ಹುಲಿಬೇಟೆಯ ಸ್ವರೂಪ ಮತ್ತು ತಂತ್ರಗಾರಿಕೆಗಳಲ್ಲಿ ಬದಲಾವಣೆಗಳಿದ್ದವು. ರಕ್ಷಣೆಯ ಉದ್ದೇಶಕ್ಕಾಗಿಯೇ ಹುಲಿಗಳನ್ನು ಬೇಟೆಯಾಡುತ್ತಿದ್ದರು. ಜನರಿಗೆ ತೊಂದರೆ ನೀಡುವ ಹುಲಿಗಳನ್ನು ಕೊಲ್ಲಲು ಕಾನೂನಿನ ಮಾನ್ಯತೆ ಇದ್ದಂತೆ ತೋರುತ್ತದೆ. ಆ ಕಾಲದಲ್ಲಿ ಸಾಂಪ್ರದಾಯಿಕ ಆಯುಧಗಳ ಬದಲು ಬಂದೂಕುಗಳನ್ನು ಬಳಸಿದ್ದಾರೆ. ಅವರು ನುರಿತ ಬೇಟೆಗಾರರಾಗಿದ್ದು, ಹುಲಿಯ ಚಲನವಲನಗಳ ಮೇಲೆ ನಿಗಾಯಿಡುತ್ತಿದ್ದರು. ಗೊತ್ತು ಮಾಡಿದ ಜಾಗದಲ್ಲಿ ಮರಸು ಹಾಕಿ ಹುಲಿಯನ್ನು ಕಾಯುತ್ತಾ ಕುಳಿತು, ಸಂದರ್ಭ ಒದಗಿಬಂದಾಗ ಹುಲಿಯನ್ನು ಬೇಟೆಯಾಡುತ್ತಿದ್ದರು. ಇಲ್ಲಿ ಬೇಟೆಗಾರರು ಪ್ರಾಣ ಕಳೆದುಕೊಂಡ ಸನ್ನಿವೇಶಗಳು ಕಡಿಮೆ.

1973ರ ಹುಲಿ ಸಂರಕ್ಷಣಾ ಕಾಯ್ದೆ ಅನ್ವಯ ಹುಲಿಬೇಟೆಯನ್ನು ನಿಷೇಧಿಸಲಾಗಿದೆ. ಈ ಕಾಯ್ದೆ ಜಾರಿಗೆ ಬಂದಾಗ ಹುಲಿಯು ಅಳಿವಿನಂಚಿನ ಪ್ರಾಣಿಯಾಗಿತ್ತು. ಆ ಸಂಧರ್ಭದಲ್ಲಿ ಭಾರತದಾದ್ಯಂತ ಹುಲಿಗಳ ಸಂಖ್ಯೆ ಕೇವಲ 260 ಆಗಿದ್ದು ಹುಲಿ ಸಂತತಿ ರಕ್ಷಣೆ ಅಗತ್ಯವಾಗಿತ್ತು. ಪ್ರಸ್ತುತದಲ್ಲಿ ಹುಲಿಬೇಟೆಯ ಸ್ವರೂಪ ಮತ್ತು ಉದ್ದೇಶ ಬದಲಾವಣೆಯಾಗಿದ್ದು ಕಳ್ಳ ಬೇಟೆ ನಡೆಯುತ್ತಿದೆ ಹುಲಿಯ ಚರ್ಮ, ಉಗುರು, ಹಲ್ಲು, ಮೂಳೆಗಳಿಗಾಗಿ ಬೇಟೆ ನಡೆಯುತ್ತಿದೆ ಇದರಿಂದ ಹುಲಿಗಳ ಸಂಖ್ಯೆ

ಕಡಿಮೆಯಾಗಲು ಕಾರಣವಾಗಿದೆ. ಬೇಟೆ ಕೇವಲ ಹಸಿವಿನ ದಾಹ ತೀರಿಸುವುದಾಗಿರದೆ ಲಾಭ ನಿಮಿತ್ತ ಉದ್ಯಮವಾಗಿ ರೂಪುಗೊಂಡಿತು. ಪ್ರಾಣಿಗಳ ಚರ್ಮ, ಹಲ್ಲು, ಕೊಂಬು, ಉಗುರು ಇತ್ಯಾದಿ ವಸ್ತುಗಳಿಗೆ ಅಪಾರ ಬೇಡಿಕೆ ಬಂತು, ಹೀಗೆ ಆರ್ಥಿಕ ದೃಷ್ಟಿಯಿಂದ ಪ್ರಾಣಿಗಳನ್ನು ಕೊಲ್ಲುವುದು ಪರಿಪಾಠವಾಯಿತು. ಇತ್ತೀಚೆಗೆ ಅಕ್ಟೋಬರ್–2023ರಲ್ಲಿ ಹುಲಿ ಉಗುರು ಧರಿಸುವುದರ ಮೇಲೆ ದಾಖಲಾದ ಪ್ರಕರಣವು ರಾಜ್ಯಾದ್ಯಂತ ಸಂಚಲನ ಉಂಟುಮಾಡಿತ್ತು. ಶ್ರೀಮಂತರು, ರಾಜಕಾರಣಿಗಳು, ಸಿನಿಮಾ ನಟರು ಹುಲಿ ಉಗುರಿನಿಂದ ಮಾಡಿದ ಆಭರಣಗಳನ್ನು ಧರಿಸಿದ್ದರ ಬಗ್ಗೆ ವಿರೋಧ ವ್ಯಕ್ತವಾಗಿತ್ತು. ಪ್ರಾಣಿಗಳ ಅಗಾಂಗಳನ್ನು ಧರಿಸುವುದು ಪ್ರತಿಷ್ಠೆಯಾಗಿದೆ. ಈ ಎಲ್ಲಾ ಕಾರಣಗಳಿಂದ ಅಳಿವಿನಂಚಿಗೆ ಸರಿದಿರುವ ಹುಲಿ ಸಂತತಿಯ ರಕ್ಷಣೆ ಮಾಡಬೇಕಿದೆ.

ಪ್ರಾಚೀನ ಕಾಲಕ್ಕೂ ಪ್ರಸ್ತುತಕ್ಕೂ ಹೋಲಿಸಿ ನೋಡಿದಾಗ ಹುಲಿಬೇಟೆಯ ಸ್ವರೂಪ ಹಾಹೂ ಉದ್ದೇಶಗಳಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ. ಹುಲಿಯ ಸಂಖ್ಯೆ ಕಡಿಮೆಯಾದಲ್ಲಿ ಜೀವ ಪರಿಸರ ವ್ಯವಸ್ಥೆಯ ಸಮತೋಲನದ ಮೇಲೆ ಪ್ರತಿಕೂಲ ಪ್ರಭಾವ ಉಂಟಾಗುತ್ತದೆ. ಅಳಿವಿನಂಚಿನಲ್ಲಿರುವ ಹುಲಿ ಪ್ರಬೇದದ ರಕ್ಷಣೆಗೆ ಜಾರಿಗೊಂಡಿರುವ ಕಾನೂನುಗಳು ಕಟ್ಟುನಿಟ್ಟಾಗಿ ಜಾರಿಯಾಗುವ ಅವಶ್ಯಕತೆಯಿದೆ.

**ಆಕರ/ಪರಾಮರ್ಶನ ಗ್ರಂಥಗಳು**


- ಚಿದಾನಂದಮೂರ್ತಿ, ಎಮ್. (2017). *ಕನ್ನಡ ಶಾಸನಗಳ ಸಾಂಸ್ಕೃತಿ ಅಧ್ಯಯನ.* ಸಪ್ನ ಬುಕ್‌ಹೌಸ್.
- ದೇವುಡು ನರಸಿಂಹಶಾಸ್ತ್ರಿ & ಶಿವಮೂರ್ತಿಶಾಶಸ್ತ್ರೀ. (ಸಂ.). (1956). *ಮಹಾಕವಿ ಲಕ್ಷ್ಮೀಶ ವಿರಚಿತ ಕನ್ನಡ ಜೈಮಿನಿ ಭಾರತ.* ಮೈಸೂರು ಸಂಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ.
- ಗೋಪಾಲ್, ಆರ್. (2009). *ಚಿಕ್ಕಮಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ.* ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ.
- ನರಸಿಂಹ ಮೂರ್ತಿ, ಎ. ವಿ. (ಸಂ.). (1988). *ಎಪಿಗ್ರಾಪಿಯ ಕರ್ನಾಟಕ ಸಂಪುಟ 11.* ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ.
- ನರಸಿಂಹ ಮೂರ್ತಿ, ಎ. ವಿ. (ಸಂ.). (2003). *ಎಪಿಗ್ರಾಪಿಯ ಕರ್ನಾಟಕ ಸಂಪುಟ 12.* ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ.
- ನಾಗರಾಜರಾವ್, ಹೆಚ್. ಎಮ್. (2008). *ಶಿವಶೋಧ.* ರಚನಾ ಪ್ರಕಾಶನ.
- ನಾಗೇಗೌಡ, ಹೆಚ್. ಎಲ್. (2021). *ಪ್ರವಾಸಿ ಕಂಡ ಇಂಡಿಯಾ ಸಂ–3.* ಐಬಿಹೆಚ್ ಪ್ರಕಾಶನ.
- ಪರಮಶಿವಮೂರ್ತಿ. ಡಿ. ವಿ. (1999). *ಕನ್ನಡ ಶಾಸನ ಶಿಲ್ಪ.* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.
- ಪಾಂಡುರಂಗ, ಹೆಚ್. ಆರ್. (2022). ಕಳಸ ಸೀಮೆ–ಸಂಸೆ ಮೂರು ನಾಡಿನ ಅಪ್ರಕಟಿತ ವೀರಗಲ್ಲುಗಳು. *ಇತಿಹಾಸ ದರ್ಶನ*–37.
- ಪೂರ್ಣಚಂದ್ರ ತೇಜಸ್ವಿ, ಕೆ. ಪಿ. (2021). *ಕಾಡಿನ ಕತೆಗಳು ಭಾಗ–2.* ಪುಸ್ತಕ ಪ್ರಕಾಶನ.
- ರಮೇಶ್, ಸ. ಚಿ., (2003). *ಶಿಕಾರಿ ಪರಂಪರೆ.* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.
- ಸಾಕ್ಷಿ. (2019). *ಹೊಳಲ್ಕೆರೆಯ ನರಭಕ್ಷಕ ಮತ್ತು ಇತರ ಕೆನೆತ್ ಆಂಡರ್ಸನ್ ಕತೆಗಳು.* ಆಕೃತಿ ಪುಸ್ತಕ.
- ಷೇಕ್ ಅಲಿ, ಬಿ. (2018). *ಕರ್ನಾಟಕ ಚರಿತ್ರೆ ಸಂ–2.* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.
- ಶೇಷಾಶಾಸ್ತ್ರಿ, ಆರ್. (2017). *ಕರ್ನಾಟಕದ ವೀರಗಲ್ಲುಗಳು.* ಕಾಮದೇನು ಪುಸ್ತಕ ಭವನ.

- ಸುಪ್ರಿತಾ. ಕೆ. ಎನ್. (2021). *ಕಳಸ ಪರಿಸರದಲ್ಲಿನ ಜಿಂಕೆ ಬೇಟೆ ವೀರಗಲ್ಲುಗಳ ವಿಶ್ಲೇಷಣೆ. ಇತಿಹಾಸ ದರ್ಶನ*–36.
- ವಿರೂಪಾಕ್ಷಿ ಪೂಜಾರಿಹಳ್ಳಿ. (2015). *ವಿಜಯನಗರ ಕಾಲದ ಸಂಸ್ಕೃತಿ: ಬೇಟೆ, ಪಶುಪಾಲನೆ* ಮತ್ತು *ಕೃಷಿ.* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.
- ಹೊನ್ನೂರ ಸ್ವಾಮಿ. ಹೆಚ್. (2022). ಕಳೆದ ಶತಮಾನದ ಹುಲಿಬೇಟೆ ಸ್ಮಾರಕ ಶಾಸನ. *ಇತಿಹಾಸ ದರ್ಶನ*–37.


**ಅನುಬಂಧ–1 ಛಾಯಾಚಿತ್ರಗಳು**



ಚಿತ್ರ–1 ಅಂಬಳೆ



ಚಿತ್ರ–2 ಬಳ್ಳಿಗನೂರು



ಚಿತ್ರ–3 ಕುಮಾರಗಿರಿ



ಚಿತ್ರ–4 ಸೋಮನಹಳ್ಳಿ



ಚಿತ್ರ–5 ಅರಸಿನಗುಪ್ಪೆ



ಚಿತ್ರ–6 ಸಂಸೆ



ಚಿತ್ರ–7 ಬಸರೀಕಲ್ಲು



ಚಿತ್ರ–8 ಕುದುರೆಮುಖ



ಚಿತ್ರ–9 ನಲ್ಲಿಬೀಡು

